# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 163 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಡಾ॥ ಕೆ.ಗೋವಿಂದರಾಜ್<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 13.09.2021 |
| ಉತ್ತರಿಸುವ ಸಚಿವರು | : | ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಬಡವರ ಹಸಿವು ನೀಗಿಸಲು ಬಳಕೆಯಾಗಬೇಕಾದ ಅನ್ನಭಾಗ್ಯದ ಅಕ್ಕಿ ಕಾಳಸಂತೆ ಪಾಲಾಗುತ್ತಿರುವುದು ಹಾಗೂ ಆಫ್ರಿಕಾ ರಾಷ್ಟ್ರಗಳಿಗೆ ಮಾರಾಟವಾಗುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಇದಕ್ಕೆ ಜವಾಬ್ದಾರರು ಯಾರು;<br>(ಈ ಕುರಿತಾದ ಸಂಪೂರ್ಣ ಮಾಹಿತಿ ಒದಗಿಸುವುದು) | ಅನ್ನಭಾಗ್ಯ ಯೋಜನೆಯಡಿ ವಿತರಿಸಲಾಗುವ ಅಕ್ಕಿಯು ಕಾಳಸಂತೆ ಪಾಲಾಗುತ್ತಿರುವ ಬಗ್ಗೆ ಹಾಗೂ ಆಫ್ರಿಕಾ ರಾಷ್ಟ್ರಗಳಿಗೆ ಮಾರಾಟ ಮಾಡುತ್ತಿರುವ ಬಗ್ಗೆ ದಿನಪತ್ರಿಕೆಗಳಲ್ಲಿ ವರದಿ ಪ್ರಕಟವಾಗಿದ್ದು, ಈ ಬಗ್ಗೆ ತನಿಖೆಯನ್ನು ಕೈಗೊಳ್ಳಲಾಗುತ್ತಿದೆ. |
| (ಆ) | ರಾಜ್ಯ ಸರ್ಕಾರ ಬೆಂಬಲ ಬೆಲೆ ಯೋಜನೆಯಡಿಯಲ್ಲಿ (ಎಂ.ಎಸ್.ಪಿ) ಖರೀದಿಸಲಾದ ಭತ್ತ ಮತ್ತು ನಂತರದಲ್ಲಿ ಅಕ್ಕಿಯನ್ನು ಪಡಿತರ ವಿತರಣೆ ಮೂಲಕ ವಿತರಿಸುವ ನಿಟ್ಟಿನಲ್ಲಿ ಹಲವು ಲೋಪದೋಷ, ಅಕ್ರಮ, ನಿಯಮ ಉಲ್ಲಂಘನೆ ಆಗಿರುವುದು ಮತ್ತು ಈ ಕುರಿತಾಗಿ ಆಹಾರ ಮತ್ತು ನಾಗರೀಕ ಪೂರೈಕೆ ಇಲಾಖೆಯ ಜಂಟಿ ಆಯುಕ್ತರ ಮಟ್ಟದ ತನಿಖೆ ನಡೆಯುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಈ ಕುರಿತಾದ ಫಲಶೃತಿ ಹಾಗೂ ಕೈಗೊಂಡ ಕ್ರಮಗಳ ಬಗ್ಗೆ ಸಂಪೂರ್ಣ ವಿವರ ಒದಗಿಸುವುದು; | ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ (ಎಂ.ಎಸ್.ಪಿ) ಖರೀದಿಸಲಾದ ಭತ್ತದ ಸಂಗ್ರಹಣೆ ಮತ್ತು ಅಕ್ಕಿಯನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುವ ಬಗ್ಗೆ ಹಲವಾರು ದೂರುಗಳು ಬಂದ ಕಾರಣ ಜಂಟಿ ನಿರ್ದೇಶಕರುಗಳ ಮುಂದಾಳತ್ವದಲ್ಲಿ ತಪಾಸಣೆ ಕೈಗೊಳ್ಳಲು ತನಿಖಾ ತಂಡಗಳನ್ನು ರಚಿಸಲಾಗಿದೆ. ತನಿಖೆ ಪ್ರಗತಿಯಲ್ಲಿದೆ. |
| (ಇ) | ಪಡಿತರ ಧಾನ್ಯಗಳು ಕಾಳಸಂತೆಕೋರರ ಕೈ ಸೇರದಂತೆ ತಡೆಯುವ ಇಚ್ಛಾಶಕ್ತಿ ರಾಜ್ಯ ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ ಕೈಗೊಂಡ ಕ್ರಮಗಳೇನು; | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯಲ್ಲಿ ಪ್ರತಿ ಪಡಿತರ ಫಲಾನುಭವಿಗಳ ಮಾಹಿತಿಯನ್ನು ಸಂಪೂರ್ಣವಾಗಿ ಗಣಕೀಕರಣ ಮಾಡಲಾಗಿದೆ. ಪಡಿತರ ಪದಾರ್ಥಗಳನ್ನು ಪಡಿತರ ಚೀಟಿದಾರರ ಬಯೋಮೆಟ್ರಿಕ್ ದೃಢೀಕರಣದ ಮೂಲಕ ವಿತರಿಸಲಾಗುತ್ತಿದೆ. ಪಡಿತರ ವಿತರಣೆ ವಿವರಗಳನ್ನು ಯಾವುದೇ ಸಾರ್ವಜನಿಕರು ನೈಜ ವೇಳೆ ಆಧಾರದಲ್ಲಿ ಇಲಾಖೆಯ ವೆಬ್‌ಸೈಟ್‌ನಿಂದ ಪರಿಶೀಲಿಸಬಹುದು. |

| | | |
|---|---|---|
| | | ಹಾಗೂ ಪ್ರತಿ ಪಡಿತರ ಚೀಟಿದಾರರಿಗೆ ತಮ್ಮ ಪಡಿತರ ಹಕ್ಕಿನ ಬಗ್ಗೆ ಪ್ರತಿ ತಿಂಗಳು ಮೊಬೈಲ್‌ಗೆ ಸಂಕ್ಷಿಪ್ತ ಸಂದೇಶಗಳನ್ನು ಕಳುಹಿಸಿಕೊಡಲಾಗುತ್ತಿದೆ. ಈ ಉದ್ದೇಶಕ್ಕಾಗಿ 'ಇಲಾಖೆಯಲ್ಲಿ ರಾಜ್ಯ ಮಟ್ಟದ ಆಹಾರ ಜಾಗೃತಿ ಮತ್ತು ತನಿಖಾ ದಳವನ್ನು ರಚಿಸಲಾಗಿದೆ. ಅದರಂತೆ ಜಿಲ್ಲಾ ಮಟ್ಟದಲ್ಲಿ ಜಿಲಾಧಿಕಾರಿಗಳು ಹಾಗೂ ತಾಲ್ಲೂಕು ಮಟ್ಟದಲ್ಲಿ ತಹಶಿಲ್ದಾರ್ ಅವರ ನೇತೃತ್ವದಲ್ಲಿ ನಿರಂತರ ತನಿಖೆಗಳು ನಡೆಯುತ್ತಿವೆ.<br>ಪಡಿತರ ಆಹಾರ ಧಾನ್ಯಗಳ ಅಕ್ರಮ ಮಾರಾಟಗಾರರ ವಿರುದ್ಧ ಕ್ರಮ ಕೈಗೊಳ್ಳಲು ಸರ್ಕಾರ ಆದೇಶ No.FCS/21/RPR/2019(E-Office) ದಿನಾಂಕ: 10-12-2020 ರಲ್ಲಿ ಪಡಿತರ ಫಲಾನುಭವಿಗಳು ತಮ್ಮ ಪಡಿತರ ಪದಾರ್ಥಗಳನ್ನು ಮಾರಾಟ ಮಾಡುವ ಪ್ರಕರಣಗಳಲ್ಲಿ ಅಂತಹ ಕುಟುಂಬದ ಪಡಿತರ ಚೀಟಿಯನ್ನು ಅಮಾನತ್ತು ಪಡಿಸಲಾಗುವುದು ಹಾಗೂ ಅಂತಹ ಪಡಿತರ ಚೀಟಿದಾರರಿಂದ ಮುಕ್ತ ಮಾರುಕಟ್ಟೆ ದರದಲ್ಲಿ ಪಡಿತರ ಆಹಾರಧಾನ್ಯಕ್ಕೆ ದಂಡ ವಸೂಲಾತಿ ಮಾಡಲಾಗುವುದು.<br>ಇದಲ್ಲದೇ ಅಗತ್ಯ ವಸ್ತುಗಳ ಕಾಯ್ದೆ ಮತ್ತು ಸಾರ್ವಜನಿಕ ವಿತರಣಾ ಪದ್ಧತಿ ಆದೇಶಗಳಡಿ 2020-21 ನೇ ಸಾಲಿನಲ್ಲಿ ಒಟ್ಟು 273 ಪ್ರಕರಣಗಳು ದಾಖಲಾಗಿದ್ದು, ಈ ಪೈಕಿ 260 ಎಫ್‌ಐಆರ್ ದಾಖಲಾಗಿರುತ್ತದೆ ಹಾಗೂ 369 ವ್ಯಕ್ತಿಗಳನ್ನು ಬಂಧಿಸಿ ಒಟ್ಟು 24183.565 ಎಂ.ಟಿ ಅಕ್ಕಿ ಹಾಗೂ 98.34 ಎಂ.ಟಿ ಗೋಧಿ ಹಾಗೂ 0.25 ಎಂ.ಟಿ ಸಕ್ಕರೆಯನ್ನು ಜಪ್ತಿ ಮಾಡಲಾಗಿರುತ್ತದೆ. |

ಆನಾಸ 236 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು